# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1267 (1545)
2. ಸದಸ್ಯರ ಹೆಸರು (ಶಿಕ್ಷಕರಕ್ಷೇತ್ರ) : ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ
3. ಉತ್ತರಿಸುವ ದಿನಾಂಕ : 19-03-2020
4. ಉತ್ತರಿಸುವ ಸಚಿವರು : ಮುಖ್ಯಮಂತ್ರಿ

| ಪ್ರಶ್ನೆ | ಉತ್ತರ |
|---|---|
| ಅ) ಕರ್ನಾಟಕ ರಾಜ್ಯ ಸರ್ಕಾರಿ ದಿನಗೂಲಿ ನೌಕರರ ಮಹಾಮಂಡಳ, ಹುಬ್ಬಳ್ಳಿ ಇವರು ರಾಜ್ಯ ಸರ್ಕಾರಕ್ಕೆ ತಮ್ಮ ಬೇಡಿಕೆಗಳ ಬಗ್ಗೆ ಮನವಿ ಸಲ್ಲಿಸಿರುವುದು ನಿಜವೇ; | ಹೌದು |
| ಆ) ನಿಜವಿದ್ದಲ್ಲಿ, ಅವರ ಪ್ರಮುಖ ಬೇಡಿಕೆಗಳೇನು; | **ಕರ್ನಾಟಕ ದಿನಗೂಲಿ ನೌಕರರ ಕ್ಷೇಮಾಭಿವೃದ್ಧಿ ಅಧಿನಿಯಮ, 2012ರಡಿ ಅಧಿಸೂಚಿತರಾಗಿರುವ ದಿನಗೂಲಿ ನೌಕರರ ಪ್ರಮುಖ ಬೇಡಿಕೆಗಳು**.<br>1. 6ನೇ ವೇತನ ಆಯೋಗದ ಪರಿಷ್ಕೃತ ವೇತನವನ್ನು ದಿನಾಂಕ: 01-04-2018ರಿಂದ ನೀಡುವುದು.<br>2. ಎಲ್ಲಾ ಆರ್ಥಿಕ ಸೌಲಭ್ಯಗಳನ್ನು ದಿನಾಂಕ; 15-02-2013ರಿಂದ ನೀಡುವುದು.<br>3. ಎನ್.ಪಿ.ಎಸ್.ಸ್ವಾವಲಂಬನ್ ಯೋಜನೆಯನ್ನು ಅಥವಾ ಪಿಂಚಣಿ ಯೋಜನೆಯನ್ನು ಜಾರಿಗೊಳಿಸುವುದು.<br>4. ತುಟ್ಟಿಭತ್ಯೆ ಹಾಗೂ ಮನೆ ಬಾಡಿಗೆ ಭತ್ಯೆಯನ್ನು ಇತರ ಸರ್ಕಾರಿ ನೌಕರರಿಗೆ ನೀಡುವಂತೆ ಶೇ.100ರಷ್ಟು ನೀಡುವುದು.<br>5. ಗಳಿಕೆ ರಜೆ ನಗದೀಕರಣ ಸೌಲಭ್ಯವನ್ನು ನೀಡುವುದು.<br>6. ಅನುಕಂಪದ ಆಧಾರದ ಮೇಲೆ ನೇಮಕಾತಿ ನೀಡುವುದು.<br>7. ಅಧಿಸೂಚಿತ ದಿನಗೂಲಿ ನೌಕರರನ್ನು ಖಾಯಂಗೊಳಿಸುವುದು.<br>8. ಬಾಕಿ ದಿನಗೂಲಿ ನೌಕರರನ್ನು 2012ರ ಅಧಿನಿಯಮದಡಿ ಅಧಿಸೂಚಿಸುವುದು.<br>9. ವೈಟೇಜ್ ಫಾರ್ ಸರ್ವೀಸ್ ನೀಡುವುದು. |
| ಇ) ಸರ್ಕಾರ ಇವರ ಬೇಡಿಕೆಗಳಿಗೆ ಸ್ಪಂದಿಸಿ ಅವರನ್ನು ಖಾಯಂಗೊಳಿಸಲು ಏನಾದರೂ ಕ್ರಮಕೈಗೊಂಡಿರುವುದೇ ಅಥವಾ ಇವರಿಗೆ ಸಮಾನ ಕೆಲಸಕ್ಕೆ ಸಮಾನ ವೇತನ ಕೊಡಲು ಸರ್ಕಾರ ಕ್ರಮಕೈಗೊಳ್ಳುವುದೇ? | ಭಾರತದ ಸರ್ವೋಚ್ಚ ನ್ಯಾಯಾಲಯದ ಸಂವಿಧಾನ ಪೀಠವು ಉಮಾದೇವಿ ಪ್ರಕರಣದಲ್ಲಿ (ಸಿವಿಲ್ ಅಪೀಲು ಸಂಖ್ಯೆ: 1861-2063/2001) ದಿನಾಂಕ: 10/04/2006ರಂದು ನೀಡಿದ ತೀರ್ಪಿನಲ್ಲಿ ಸರ್ಕಾರದ ಯಾವುದೇ ನೇಮಕಾತಿಗಳನ್ನು ಸಂವಿಧಾನಾತ್ಮಕವಾಗಿ ರಚಿಸಲಾದ ನಿಯಮಗಳು ಹಾಗೂ ವಿಧಿ ವಿಧಾನಗಳನ್ನು ಅನುಸರಿಸಿ ಮಾತ್ರ ಮಾಡಬೇಕೆಂದು ನಿರ್ದೇಶನಗಳನ್ನು ನೀಡಿದೆ. ಅದರಂತೆ, ದಿನಾಂಕ: 1.7.1984ರ ನಂತರ ನೇಮಕಗೊಂಡ ದಿನಗೂಲಿ ನೌಕರರನ್ನು ಸರ್ಕಾರಿ ಸೇವೆಯಲ್ಲಿ ಖಾಯಂಗೊಳಿಸಲು ಅವಕಾಶವಿರುವುದಿಲ್ಲ. |

| | |
|---|---|
| | ಆದರೆ, ರಾಜ್ಯ ಸರ್ಕಾರದ ಇಂತಹ ದಿನಗೂಲಿ ನೌಕರರಿಗೆ ಸೇವಾವಧಿಯ ಕನಿಷ್ಠ ಭದ್ರತೆ, ಉತ್ತಮ ವೇತನ ಮತ್ತು ದೀರ್ಘಾವಧಿಯ ಸರ್ಕಾರಿ ಸೇವೆಯನ್ನು ಕೊನೆಗೊಳಿಸಿರುವವರಿಗೆ ಕೆಲವು ಸಾಮಾಜಿಕ ಭದ್ರತೆಯನ್ನು ಕಲ್ಪಿಸುವ ಉದ್ದೇಶದಿಂದ ಕರ್ನಾಟಕ ದಿನಗೂಲಿ ನೌಕರರ ಕ್ಷೇಮಾಭಿವೃದ್ಧಿ ಅಧಿನಿಯಮ, 2012ನ್ನು ಜಾರಿಗೊಳಿಸಿರುತ್ತದೆ.<br><br>ಈ ಅಧಿನಿಯಮದಡಿ ಅಧಿಸೂಚಿತಗೊಂಡ ದಿನಗೂಲಿ ನೌಕರರು ಸರ್ಕಾರಿ ನೌಕರರ ಸ್ಥಾನಮಾನವನ್ನು ಹೊಂದಿರದೇ ಇರುವುದರಿಂದ ಇವರಿಗೆ ಸಮಾನ ಕೆಲಸಕ್ಕೆ ಸಮಾನ ವೇತನ ತತ್ವದಡಿ ಸರ್ಕಾರಿ ನೌಕರರಿಗೆ ಸರಿಸಮಾನವಾದ ವೇತನವನ್ನು ನೀಡಲು ಅವಕಾಶವಿರುವುದಿಲ್ಲ. |

ಸಂಖ್ಯೆ: ಸಿಆಸುಇ 14 ಸೇಸ್ವಅ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ